# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 17ನೇ ಜುಲೈ, 2014
(ಸಮಯ: ಬೆಳಗ್ಗೆ 10.00 ಗಂಟೆಗೆ)

-----

### 1. ವರದಿಯನ್ನೊಪ್ಪಿಸುವುದು

ಶ್ರೀ ಎನ್.ಹೆಚ್. ಶಿವಶಂಕರ ರೆಡ್ಡಿ (ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಖಾಸಗಿ ಸದಸ್ಯರುಗಳ ವಿಧೇಯಕ ಹಾಗೂ ನಿರ್ಣಯಗಳ ಸಮಿತಿ) ಅವರು 2013-14ನೇ ಸಾಲಿನ ಸಮಿತಿಯ ಆರನೇ ವರದಿಯನ್ನು ಒಪ್ಪಿಸುವುದು.

### 2. ವಿತ್ತೀಯ ಕಾರ್ಯಕಲಾಪಗಳು

ಅ) 2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮೇಲೆ ನಡೆದ ಚರ್ಚೆಗೆ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 13 | ಆಹಾರ ಮತ್ತು ನಾಗರೀಕ ಸರಬರಾಜು |

ಆ) 2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮೇಲೆ ಮುಂದುವರೆದ ಚರ್ಚೆ ಹಾಗೂ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 17 | ಶಿಕ್ಷಣ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು |

ಇ) 2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮಂಡನೆ, ಚರ್ಚೆ ಹಾಗೂ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |

ಪು.ತಿ.ನೋ.,

## ೩. ಶಾಸನ ರಚನೆ

**ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು**

**ಕರ್ನಾಟಕ ಕೆರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2014**
**ಶ್ರೀ ಶಿವರಾಜ್ ಎಸ್. ತಂಗಡಗಿ (ಸಣ್ಣ ನೀರಾವರಿ ಸಚಿವರು) ಅವರು:-**

ಅ) 2014 ನೇ ಸಾಲಿನ ಕರ್ನಾಟಕ ಕೆರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 4. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹತ್ತೊಂಬತ್ತನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹತ್ತೊಂಬತ್ತನೇ ಪಟ್ಟಿ**

## 5. ಖಾಸಗಿ ಸದಸ್ಯರ ಕಾರ್ಯಕಲಾಪಗಳು

*1. ಶ್ರೀ ಪಿ.ಎಂ. ನರೇಂದ್ರಸ್ವಾಮಿ ಹಾಗೂ ಇತರರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.*

"ಇಡೀ ರಾಜ್ಯದಲ್ಲಿ ಮದ್ಯವನ್ನು ಮಾರುವುದಕ್ಕಾಗಿ ಅಬಕಾರಿ ಇಲಾಖೆಯು ಸಿ.ಎಲ್-2 ಪರವಾನಗಿಯನ್ನು ಕೊಡುತ್ತಿದ್ದು 1991 ರಿಂದ ಮೀಸಲಾತಿ ನಿಯಮವನ್ನು ಪಾಲಿಸಿಲ್ಲದಿರುವುದರ ಜೊತೆಗೆ 2011ರ ಜನಗಣತಿ ಪ್ರಕಾರ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಜನಸಂಖ್ಯೆಯು ಕೂಡ ಹೆಚ್ಚಾಗಿರುವುದರಿಂದ ಹೆಚ್ಚಾದ ಜನಸಂಖ್ಯೆಗನುಗುಣವಾಗಿ ಮೀಸಲಾತಿ ನಿಯಮಗಳನ್ನು ಪಾಲನೆ ಮಾಡಿ 1500 ಪರವಾನಗಿಗಳನ್ನು ಈ ವರ್ಗದ ಜನಾಂಗದವರಿಗೆ ಮಂಜೂರು ಮಾಡುವ" ಕುರಿತು ಈ ಸದನವು ನಿರ್ಣಯಿಸುತ್ತದೆ."

**ಮು.ತಿ.ನೋ.,**

2. ***ಶ್ರೀ ಪಿ.ಎಂ. ನರೇಂದ್ರ ಸ್ವಾಮಿ ಹಾಗೂ ಇತರರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.***

"ಸರ್ಕಾರವು ಹೊರಗುತ್ತಿಗೆ, ಅರೆಸರ್ಕಾರಿ ಹಾಗೂ ಅತಿಥಿ ಹುದ್ದೆಗಳು ಎನ್ನುವ ವಿವಿಧ ಹೆಸರಿನಡಿಯಲ್ಲಿ ಹಲವಾರು ಹುದ್ದೆಗಳನ್ನು ಭರ್ತಿಮಾಡಿಕೊಳ್ಳುತ್ತಿದ್ದು ಇದು ಸಂವಿಧಾನ ಬಾಹಿರವಾಗಿರುತ್ತದೆ. 45 ದಿವಸಗಳಿಗಿಂತಲೂ ಹೆಚ್ಚಿನ ಅವಧಿಗೆ ತುಂಬಿಕೊಳ್ಳುವ ಯಾವುದೇ ರೀತಿಯ ನೇಮಕಾತಿಯಲ್ಲಿಯೂ ಮೀಸಲಾತಿ ನಿಯಮವನ್ನು ಸಂವಿಧಾನದ ಪ್ರಕಾರ ಪಾಲಿಸಬೇಕಾಗುತ್ತದೆ. ಆದುದರಿಂದ ಸರ್ಕಾರವು ಹೊರಗುತ್ತಿಗೆ ಅರೆಸರ್ಕಾರಿ ಹಾಗೂ ಅತಿಥಿ ಹುದ್ದೆಗಳು ಎಂದು ಸರ್ಕಾರ ಹಲವಾರು ರೀತಿಯ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವಾಗ ಮೀಸಲಾತಿ ನಿಯಮವನ್ನು ಚಾಚೂ ತಪ್ಪದೆ ಪಾಲಿಸಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದ ಜನಾಂಗದವರಿಗೆ ನ್ಯಾಯ ಒದಗಿಸಿಕೊಡಬೇಕೆಂದು ಒತ್ತಾಯಪೂರ್ವಕವಾಗಿ ಈ ಸದನವು ನಿರ್ಣಯಿಸುತ್ತದೆ."

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(www.kar.nic.in/kla)